# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೭, ೨೦೧೫ (ಭಾದ್ರಪದ ೨೬, ಶಕ ವರ್ಷ ೧೯೩೭)<br>Bengaluru, Thursday, September 17, 2015 (Bhadrapada 26, Shaka Varsha 1937 | ಸಂಚಿಕೆ ೩೮<br>Issue 38 |
|---|---|---|


## ಭಾಗ ೩

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**FORM-I**

**(See Rule 9)**

**JUDICIAL DEPARTMENT**

**OFFICE OF THE PRL. DISTRICT AND SESSIONS JUDGE, KALABURAGI**

**NOTIFICATION Dated : 24-07-2015.**

**Sri SADANAND MALI PATIL** working as PROCESS SERVER IN THE JUDICIAL DEPARTMENT of Office of the SENIOR CIVIL JUDGE COURT ALAND is permitted to change his name to **SADANAND PATIL**

**PD C/N 37** **PRL. DISTRICT AND SESSIONS JUDGE,**

**SC-10** **KALABURAGI**

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ**

ಬಸವ ಭವನ, ಹೈ ಗ್ರೌಂಡ್ಸ್, ಬೆಂಗಳೂರು–560001

**ಅಧಿಸೂಚನೆ**

**ಸಂಖ್ಯೆ : ಕರಾಆ/ಆಡಳಿತ/127/2015, ದಿನಾಂಕ 02–09–2015**

**ವಿಷಯ :** ಕರ್ನಾಟಕ ರಾಜ್ಯದಲ್ಲಿರುವ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳ ಪೂರ್ಣಕಾಲಿಕ ಸದಸ್ಯರ ಹುದ್ದೆಗಳನ್ನು ಭರ್ತಿ ಮಾಡಲು ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

ಕರ್ನಾಟಕ ರಾಜ್ಯದಲ್ಲಿರುವ ಈ ಕೆಳಕಂಡ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳಲ್ಲಿ ಖಾಲಿ ಇರುವ ಪೂರ್ಣಕಾಲಿಕ ಸದಸ್ಯರ ಸ್ಥಾನಕ್ಕೆ ಸೂಕ್ತರಾದವರನ್ನು ಆಯ್ಕೆ ಮಾಡುವ ಸಲುವಾಗಿ ನಿಗಧಿತ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ವಿವರ ಈ ಕೆಳಗಿನಂತಿದೆ.

| ಕ್ರಮ ಸಂಖ್ಯೆ | ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಹೆಸರು | ಖಾಲಿ ಇರುವ ಸದಸ್ಯರ ಹುದ್ದೆಗಳು |
|---|---|---|
| | | ಪೂರ್ಣಕಾಲಿಕ ಸದಸ್ಯರು |
| 1 | ಬೆಂಗಳೂರು ನಗರ 3ನೇ ಹೆಚ್ಚುವರಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| 2 | ಧಾರವಾಡ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| 3 | ಹಾಸನ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| 4 | ಉತ್ತರ ಕನ್ನಡ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| | **ಒಟ್ಟು** | **04** |

**1. ವಿದ್ಯಾರ್ಹತೆ ಮತ್ತು ಅನುಭವ**

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1)(ಬಿ) ರನ್ವಯ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ ಹುದ್ದೆಗೆ ಅರ್ಜಿ ಸಲ್ಲಿಸಲು ಈ ಕೆಳಕಂಡ ಅರ್ಹತೆ ಹೊಂದಿರಬೇಕು.

i. ಅಭ್ಯರ್ಥಿಗೆ ಕನಿಷ್ಠ 35 ವರ್ಷ ವಯಸ್ಸಾಗಿರತಕ್ಕದ್ದು.

ii. ಅಭ್ಯರ್ಥಿಯು ಯಾವುದಾದರೂ ಅಂಗೀಕೃತ ವಿಶ್ವವಿದ್ಯಾಲಯದ ಪದವೀಧರರಾಗಿರಬೇಕು.

iii. ಅಭ್ಯರ್ಥಿಯು ನ್ಯಾಯ, ನಿಷ್ಠೆ ಮತ್ತು ಪ್ರಾಮಾಣಿಕೆಯನ್ನು ಹೊಂದಿರುವುದರ ಜೊತೆಗೆ ಕಾನೂನು ಹಣಕಾಸು, ವಾಣಿಜ್ಯ, ಲೆಕ್ಕ ಕೈಗಾರಿಕೆ, ಸಾರ್ವಜನಿಕ ವ್ಯವಹಾರಗಳ ಮತ್ತು ಸಾರ್ವಜನಿಕ ಆಡಳಿತ ಈ ಕ್ಷೇತ್ರಗಳಲ್ಲಿ ಕನಿಷ್ಠ 10 ವರ್ಷಗಳ ಅನುಭವ ಹೊಂದಿರಬೇಕು.

**2. ಸೇವಾವಧಿ**

ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಪೂರ್ಣಕಾಲಿಕ ಸದಸ್ಯರ ಸೇವಾವಧಿಯು ಗ್ರಾಹಕರ ಸಂರಕ್ಷಣಾ ಕಾಯ್ದೆ 1986ರ ಕಲಂ 10(2) ರನ್ವಯ 5 ವರ್ಷ ಅಥವಾ 65 ವರ್ಷ ವಯಸ್ಸು ಪೂರ್ಣವಾಗುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ.

**3. ವೇತನ ಮತ್ತು ಭತ್ಯೆಗಳು**

(ಅ) ಸರ್ಕಾರದ ಆದೇಶ ಸಂ : ಅನಾಸ 65 ಸಲಘ 2012 ದಿನಾಂಕ 21–02–2014 ರನ್ವಯ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಪೂರ್ಣಕಾಲಿಕ ಸದಸ್ಯರಾಗಿ ಆಯ್ಕೆಗೊಂಡವರು ಪ್ರತಿ ತಿಂಗಳಿಗೆ ರೂ. 15,000/–ಗಳ ಗೌರವಧನ ಮತ್ತು ರೂ. 2,000/–ಗಳ ಪ್ರಯಾಣ ಭತ್ಯೆ ಪಡೆಯಲು ಅರ್ಹರಿರುತ್ತಾರೆ ಹಾಗೂ ಸರ್ಕಾರದಿಂದ ಕಾಲ ಕಾಲಕ್ಕೆ ಪರಿಷ್ಕರಿಸಿ ಹೊರಡಿಸುವ ಆದೇಶಗಳು ಅನ್ವಯವಾಗುತ್ತವೆ.

**4. ಆಯ್ಕೆ ವಿಧಾನ**

ಗ್ರಾಹಕರ ಸಂರಕ್ಷಣಾ ಕಾಯ್ದೆ 1986ರ ಕಲಂ 10(1A) ರಡಿಯಲ್ಲಿನ ಆಯ್ಕೆ ಸಮಿತಿಯ ಮೂಲಕ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.

ಅರ್ಜಿ ಸಲ್ಲಿಸಲು ಇಚ್ಛಿಸುವಂತಹ ಅರ್ಹ ಅಭ್ಯರ್ಥಿಗಳು ಆಯ್ಕೆ ಬಯಸುವ ಪೂರ್ಣಕಾಲಿಕ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳ ಹೆಸರುಗಳನ್ನು ನಿಗಧಿತ ಒಂದೇ ಅರ್ಜಿ ನಮೂನೆಯಲ್ಲಿ ಸ್ಪಷ್ಟವಾಗಿ ನಮೂದಿಸಿ, ನಿಗದಿತ ಅರ್ಜಿಯನ್ನು ಪೂರ್ಣವಾಗಿ ಭರ್ತಿ ಮಾಡಿ, ಜನ್ಮ ದಿನಾಂಕ, ವಿದ್ಯಾರ್ಹತೆ ಹಾಗೂ ಅನುಭವಕ್ಕೆ ಸಂಬಂಧಪಟ್ಟ ಅಗತ್ಯ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಹಾಗೂ ರೂ.100/–ಗಳ ಭಾರತೀಯ ಪೋಸ್ಟಲ್ ಆರ್ಡರ್/ ಡಿ.ಡಿ.ಯನ್ನು ಅಧ್ಯಕ್ಷರು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಬೆಂಗಳೂರು, ಇವರ ಹೆಸರಿನಲ್ಲಿ ಪಡೆದು ಅರ್ಜಿಯಲ್ಲಿ ಶುಲ್ಕದ ವಿವರಗಳನ್ನು ಬರೆದು ಅರ್ಜಿಯೊಂದಿಗೆ ಲಗತ್ತಿಸಿ (ಆಯ್ಕೆ ಬಯಸಿರುವ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳ ಹೆಸರುಗಳನ್ನು ನಿಗದಿತ ಒಂದೇ ಅರ್ಜಿ ನಮೂನೆಯಲ್ಲಿ ನಮೂದಿಸುವುದು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆವಾರು ಹುದ್ದೆಗಳಿಗೆ ಪ್ರತ್ಯೇಕ ಅರ್ಜಿ ಸಲ್ಲಿಸುವ ಅವಶ್ಯಕತೆ ಇರುವುದಿಲ್ಲ ಹಾಗೂ ಒಂದು ಅಥವಾ ಒಂದಕ್ಕಿಂತ ಹೆಚ್ಚು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗೆ ಆಯ್ಕೆ ಬಯಸಿದ್ದರೂ ಸಹ ರೂ.100/–ಗಳ ಒಂದು ಭಾರತೀಯ ಪೋಸ್ಟಲ್ ಆರ್ಡರ್/ ಡಿ.ಡಿ. ಯನ್ನು ಮಾತ್ರ ಪಡೆದು ನಿಗದಿತ ಅರ್ಜಿಯಲ್ಲಿ ವಿವರ ಬರೆದು ಅರ್ಜಿಯೊಂದಿಗೆ ಸಲ್ಲಿಸುವುದು) **ದಿನಾಂಕ 21–09–2015ರ ಸಂಜೆ 5–00 ಘಂಟೆಯೊಳಗಾಗಿ ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿ, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈ ಗ್ರೌಂಡ್ಸ್, ಬೆಂಗಳೂರು–560001 ಇವರಿಗೆ ತಲುಪುವಂತೆ ಸಲ್ಲಿಸುವುದು.**

ನಿಗಧಿತ ದಿನಾಂಕ ಹಾಗೂ ಸಮಯದ ನಂತರ ಅಂಚೆ/ಕೊರಿಯರ್ ಮೂಲಕ ಅಥವಾ ನೇರವಾಗಿ ಬರುವಂತಹ ಯಾವುದೇ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ನಿಗಧಿತ ಅರ್ಜಿ ನಮೂನೆಯ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ವೆಬ್‌ಸೈಟ್ http://kscdrc.kar.nic.inನಲ್ಲಿ ಲಭ್ಯವಿದ್ದು, ಸಂಬಂಧಪಟ್ಟ ಅರ್ಹ ಅಭ್ಯರ್ಥಿಗಳು ವೆಬ್‌ಸೈಟಿನಿಂದ ಅರ್ಜಿ ನಮೂನೆಯನ್ನು ನೇರವಾಗಿ ಪಡೆದುಕೊಳ್ಳಬಹುದಾಗಿದೆ ಅಥವಾ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದಲ್ಲಿ ನೇರವಾಗಿ ಪ್ರತಿ ಅರ್ಜಿಗೆ ರೂ. 50/–ಗಳ ನಗದನ್ನು ಪಾವತಿ ಮಾಡಿ ಅರ್ಜಿಯನ್ನು ಪಡೆದುಕೊಳ್ಳಬಹುದು.

**ನ್ಯಾಯಮೂರ್ತಿ ಬಿ.ಎಸ್. ಇಂದ್ರಕಲಾ**
ಅಧ್ಯಕ್ಷರು
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ
ಬೆಂಗಳೂರು

**PR 219**
**S.C. 10**

## ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ

**ಬಸವ ಭವನ, ಹೈ ಗ್ರೌಂಡ್ಸ್, ಬೆಂಗಳೂರು–560001**

**ಅಧಿಸೂಚನೆ**

**ಸಂಖ್ಯೆ : ಕರಾಆ/ಆಡಳಿತ/126/2015, ದಿನಾಂಕ 02–09–2015**

**ವಿಷಯ :** ಕರ್ನಾಟಕ ರಾಜ್ಯದಲ್ಲಿರುವ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದಲ್ಲಿ ಖಾಲಿ ಇರುವ ನ್ಯಾಯಾಂಗ ವೃಂದದ ಒಂದು ಸದಸ್ಯರ ಹುದ್ದೆಯನ್ನು ಭರ್ತಿ ಮಾಡಲು ಅರ್ಜಿಯನ್ನು ಆಹ್ವಾನಿಸುವ ಬಗ್ಗೆ.

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದಲ್ಲಿ ಖಾಲಿ ಇರುವ ನ್ಯಾಯಾಂಗ ವೃಂದದ ಒಂದು ಸದಸ್ಯರ ಸ್ಥಾನಕ್ಕೆ ಸೂಕ್ತರಾದವರನ್ನು ಆಯ್ಕೆ ಮಾಡುವ ಸಲುವಾಗಿ ನಿಗಧಿತ ಅರ್ಜಿ ನಮೂನೆಯಲ್ಲಿ ಅರ್ಜಿಯನ್ನು ಆಹ್ವಾನಿಸಲಾಗಿದೆ.

1. **ವಿದ್ಯಾರ್ಹತೆ ಮತ್ತು ಅನುಭವ**

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ನ್ಯಾಯಾಂಗ ವೃಂದದ ಸದಸ್ಯರ ಹುದ್ದೆಗೆ ಅರ್ಹರಾಗಿರುವಂತಹ ಅಭ್ಯರ್ಥಿಯು ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 16(1)(ಬಿ) ರ ಮೊದಲನೇ ಪರಂತುಕ ಹಾಗೂ ಅದರೊಂದಿಗೆ ಓದಿಕೊಳ್ಳುವ ವಿವರಣೆಯ ಅನ್ವಯ ಕನಿಷ್ಠ ಹತ್ತು ವರ್ಷಗಳು ಜಿಲ್ಲಾ ಮಟ್ಟದ ನ್ಯಾಯಾಂಗ ಅಥವಾ ಟ್ರಿಬ್ಯೂನಲ್‌ಗೆ ಸರಿಮಾನವಾದ ನ್ಯಾಯಾಲಯದಲ್ಲಿ ಪೀಠಾಧಿಕಾರಿಗಳಾಗಿ ಸೇವೆ ಸಲ್ಲಿಸಿದವರು ಅಥವಾ ಜಿಲ್ಲಾ ನ್ಯಾಯಾಧೀಶರಾಗಿ ಸೇವೆ ಸಲ್ಲಿಸಿದವರು ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ.

2. **ಸೇವಾವಧಿ**

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಅಯೋಗದ ನ್ಯಾಯಾಂಗ ವೃಂದದ ಸದಸ್ಯರ ಸೇವಾವಧಿಯು 5 ವರ್ಷ ಅಥವಾ 67 ವರ್ಷ ವಯಸ್ಸು ಪೂರ್ಣವಾಗುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ.

3. **ವೇತನ ಮತ್ತು ಭತ್ಯೆಗಳು**

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಅಯೋಗದ ನ್ಯಾಯಾಂಗ ವೃಂದದ ಸದಸ್ಯರಾಗಿ ಆಯ್ಕೆಯಾದವರು ಪ್ರತಿ ತಿಂಗಳಿಗೆ ರೂ.30,000/–ಗಳ ಗೌರವಧನ ಮತ್ತು ರೂ. 3,000/–ಗಳ ಪ್ರಯಾಣ ಭತ್ಯೆ ಪಡೆಯಲು ಅರ್ಹರಿರುತ್ತಾರೆ ಹಾಗೂ ಸರ್ಕಾರದಿಂದ ಕಾಲ ಕಾಲಕ್ಕೆ ಪರಿಷ್ಕರಿಸಿ ಹೊರಡಿಸುವ ಆದೇಶಗಳು ಅನ್ವಯವಾಗುತ್ತವೆ.

4. **ಆಯ್ಕೆ ವಿಧಾನ**

ಗ್ರಾಹಕರ ಸಂರಕ್ಷಣಾ ಕಾಯ್ದೆ 1986ರ ಕಲಂ 16(1A) ರಡಿಯಲ್ಲಿನ ಆಯ್ಕೆ ಸಮಿತಿಯ ಮೂಲಕ ಅರ್ಹ ಅಭ್ಯರ್ಥಿಯನ್ನು ಆಯ್ಕೆ ಮಾಡಲಾಗುವುದು.

ಅರ್ಜಿ ಸಲ್ಲಿಸಲು ಇಚ್ಛಿಸುವಂತಹ ಅರ್ಹ ಅಭ್ಯರ್ಥಿಗಳು ನಿಗಧಿತ ಅರ್ಜಿ ನಮೂನೆಯಲ್ಲಿ ಪೂರ್ಣವಾಗಿ ವಿವರಗಳನ್ನು ಭರ್ತಿ ಮಾಡಿ, ಜನ್ಮ ದಿನಾಂಕ, ವಿದ್ಯಾರ್ಹತೆ ಹಾಗೂ ಅನುಭವಕ್ಕೆ ಸಂಬಂಧಪಟ್ಟ ಅಗತ್ಯ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಹಾಗೂ ರೂ.100/–ಗಳ ಭಾರತೀಯ ಪೋಸ್ಟಲ್ ಆರ್ಡರ್/ ಡಿ.ಡಿ.ಯನ್ನು ಅಧ್ಯಕ್ಷರು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಬೆಂಗಳೂರು, ಇವರ ಹೆಸರಿನಲ್ಲಿ ಪಡೆದು ಅರ್ಜಿಯಲ್ಲಿ ಶುಲ್ಕದ ವಿವರಗಳನ್ನು ಬರೆದು ಅರ್ಜಿಯೊಂದಿಗೆ ಲಗತ್ತಿಸಿ **ದಿನಾಂಕ : 21–09–2015ರ ಸಂಜೆ 5–00 ಘಂಟೆಯೊಳಗಾಗಿ ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿ, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈ ಗ್ರೌಂಡ್ಸ್, ಬೆಂಗಳೂರು–560001 ಇವರಿಗೆ ತಲುಪುವಂತೆ ಸಲ್ಲಿಸುವುದು.**

ನಿಗಧಿತ ದಿನಾಂಕ ಹಾಗೂ ಸಮಯದ ನಂತರ ಅಂಚೆ/ಕೊರಿಯರ್ ಮೂಲಕ ಅಥವಾ ನೇರವಾಗಿ ಬರುವಂತಹ ಯಾವುದೇ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ನಿಗಧಿತ ಅರ್ಜಿ ನಮೂನೆಯು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ವೆಬ್‌ಸೈಟ್ http://kscdrc.kar.nic.inನಲ್ಲಿ ಲಭ್ಯವಿದ್ದು, ಸಂಬಂಧಪಟ್ಟ ಅರ್ಹ ಅಭ್ಯರ್ಥಿಗಳು ವೆಬ್‌ಸೈಟಿನಿಂದ ಅರ್ಜಿ ನಮೂನೆಯನ್ನು ನೇರವಾಗಿ ಪಡೆದುಕೊಳ್ಳಬಹುದಾಗಿದೆ ಅಥವಾ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದಲ್ಲಿ ನೇರವಾಗಿ ಪ್ರತಿ ಅರ್ಜಿಗೆ ರೂ. 50/–ಗಳ ನಗದನ್ನು ಪಾವತಿ ಮಾಡಿ ಅರ್ಜಿಯನ್ನು ಪಡೆದುಕೊಳ್ಳಬಹುದು.

**ನ್ಯಾಯಮೂರ್ತಿ ಬಿ.ಎಸ್. ಇಂದ್ರಕಲಾ**
ಅಧ್ಯಕ್ಷರು
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ
ಬೆಂಗಳೂರು

**PR 220**
**S.C. 10**

## ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ
### ಬಸವ ಭವನ, ಹೈ ಗ್ರೌಂಡ್ಸ್, ಬೆಂಗಳೂರು–560001
### ಅಧಿಸೂಚನೆ
**ಸಂಖ್ಯೆ : ಕರಾಆ/ಆಡಳಿತ/128/2015, ದಿನಾಂಕ 02–09–2015**

**ವಿಷಯ :** ಕರ್ನಾಟಕ ರಾಜ್ಯದಲ್ಲಿರುವ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳ ಪೂರ್ಣಕಾಲಿಕ/ಅರೆಕಾಲಿಕ ಮಹಿಳಾ ಸದಸ್ಯರ ಹುದ್ದೆಗಳನ್ನು ಭರ್ತಿ ಮಾಡಲು ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

ಕರ್ನಾಟಕ ರಾಜ್ಯದಲ್ಲಿರುವ ಈ ಕೆಳಕಂಡ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳಲ್ಲಿ ಖಾಲಿ ಇರುವ ಪೂರ್ಣಕಾಲಿಕ/ಅರೆಕಾಲಿಕ ಮಹಿಳಾ ಸದಸ್ಯರ ಸ್ಥಾನಕ್ಕೆ ಸೂಕ್ತರಾದವರನ್ನು ಆಯ್ಕೆ ಮಾಡುವ ಸಲುವಾಗಿ ನಿಗಧಿತ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ವಿವರ ಈ ಕೆಳಗಿನಂತಿದೆ.

| ಕ್ರಮ ಸಂಖ್ಯೆ | ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಹೆಸರು | ಖಾಲಿ ಇರುವ ಮಹಿಳಾ ಸದಸ್ಯರ ಹುದ್ದೆಗಳು |
|---|---|---|
| | | **ಪೂರ್ಣಕಾಲಿಕ ಮಹಿಳಾ ಸದಸ್ಯರು** |
| 1 | ಉತ್ತರ ಕನ್ನಡ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| | | **ಅರೆ ಕಾಲಿಕ ಮಹಿಳಾ ಸದಸ್ಯರು** |
| 2 | ಕಲಬುರಗಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| | ಒಟ್ಟು | **02** |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**1. ವಿದ್ಯಾರ್ಹತೆ ಮತ್ತು ಅನುಭವ**

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1)(ಬಿ) ರನ್ವಯ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಮಹಿಳಾ ಸದಸ್ಯರ ಹುದ್ದೆಗೆ ಅರ್ಜಿ ಸಲ್ಲಿಸಲು ಈ ಕೆಳಕಂಡ ಅರ್ಹತೆ ಹೊಂದಿರಬೇಕು.

i. ಅಭ್ಯರ್ಥಿಗೆ ಕನಿಷ್ಠ 35 ವರ್ಷ ವಯಸ್ಸಾಗಿರತಕ್ಕದ್ದು.

ii. ಅಭ್ಯರ್ಥಿಯು ಯಾವುದಾದರೂ ಅಂಗೀಕೃತ ವಿಶ್ವವಿದ್ಯಾಲಯದ ಪದವೀಧರರಾಗಿರಬೇಕು.

iii. ಅಭ್ಯರ್ಥಿಯು ನ್ಯಾಯ, ನಿಷ್ಠೆ ಮತ್ತು ಪ್ರಾಮಾಣಿಕೆಯನ್ನು ಹೊಂದಿರುವುದರ ಜೊತೆಗೆ ಕಾನೂನು ಹಣಕಾಸು, ವಾಣಿಜ್ಯ, ಲೆಕ್ಕ ಕೈಗಾರಿಕೆ, ಸಾರ್ವಜನಿಕ ವ್ಯವಹಾರಗಳ ಮತ್ತು ಸಾರ್ವಜನಿಕ ಆಡಳಿತ ಈ ಕ್ಷೇತ್ರಗಳಲ್ಲಿ ಕನಿಷ್ಠ 10 ವರ್ಷಗಳ ಅನುಭವ ಹೊಂದಿರಬೇಕು.

**2. ಸೇವಾವಧಿ**

ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ ಪೂರ್ಣಕಾಲಿಕ/ಅರೆಕಾಲಿಕ ಮಹಿಳಾ ಸದಸ್ಯರ ಸೇವಾವಧಿಯು ಗ್ರಾಹಕರ ಸಂರಕ್ಷಣಾ ಕಾಯ್ದೆ 1986ರ ಕಲಂ 10(2) ರನ್ವಯ 5 ವರ್ಷ ಅಥವಾ 65 ವರ್ಷ ವಯಸ್ಸು ಪೂರ್ಣವಾಗುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ.

**3. ವೇತನ ಮತ್ತು ಭತ್ಯೆಗಳು**

(ಅ) ಸರ್ಕಾರದ ಆದೇಶ ಸಂ : ಅನಾಸ 65 ಸಲಫ 2012 ದಿನಾಂಕ 21–02–2014 ರನ್ವಯ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಪೂರ್ಣಕಾಲಿಕ ಮಹಿಳಾ ಸದಸ್ಯರಾಗಿ ಆಯ್ಕೆಗೊಂಡವರು ಪ್ರತಿ ತಿಂಗಳಿಗೆ ರೂ. 15,000/–ಗಳ ಗೌರವಧನ ಮತ್ತು ರೂ. 2,000/–ಗಳ ಪ್ರಯಾಣ ಭತ್ಯೆ ಪಡೆಯಲು ಅರ್ಹರಿರುತ್ತಾರೆ ಹಾಗೂ ಸರ್ಕಾರದಿಂದ ಕಾಲ ಕಾಲಕ್ಕೆ ಪರಿಷ್ಕರಿಸಿ ಹೊರಡಿಸುವ ಆದೇಶಗಳು ಅನ್ವಯವಾಗುತ್ತವೆ.

(ಆ) ಸರ್ಕಾರದ ಆದೇಶ ಸಂ : ಅನಾಸ 65 ಸಲಫ 2012 ದಿನಾಂಕ 21–02–2014 ರನ್ವಯ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅರೆಕಾಲಿಕ ಮಹಿಳಾ ಸದಸ್ಯರು ಒಂದು ದಿನಕ್ಕೆ ಗೌರವಧನ ರೂ. 600/–ಗಳ ಮತ್ತು ರೂ. 150/–ಗಳ ಪ್ರಯಾಣ ಭತ್ಯೆ ಪಡೆಯಲು ಅರ್ಹರಿರುತ್ತಾರೆ ಹಾಗೂ ಸರ್ಕಾರದಿಂದ ಕಾಲ ಕಾಲಕ್ಕೆ ಪರಿಷ್ಕರಿಸಿ ಹೊರಡಿಸುವ ಆದೇಶಗಳು ಅನ್ವಯವಾಗುತ್ತವೆ.

**4. ಆಯ್ಕೆ ವಿಧಾನ**

ಗ್ರಾಹಕರ ಸಂರಕ್ಷಣಾ ಕಾಯ್ದೆ 1986ರ ಕಲಂ 10(1A) ರಡಿಯಲ್ಲಿನ ಆಯ್ಕೆ ಸಮಿತಿಯ ಮೂಲಕ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.

ಅರ್ಜಿ ಸಲ್ಲಿಸಲು ಇಚ್ಛಿಸುವಂತಹ ಅರ್ಹ ಅಭ್ಯರ್ಥಿಗಳು ಆಯ್ಕೆ ಬಯಸುವ ಪೂರ್ಣಕಾಲಿಕ/ಅರೆಕಾಲಿಕ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳ ಹೆಸರುಗಳನ್ನು ನಿಗಧಿತ ಒಂದೇ ಅರ್ಜಿ ನಮೂನೆಯಲ್ಲಿ ಸ್ಪಷ್ಟವಾಗಿ ನಮೂದಿಸಿ, ನಿಗಧಿತ ಅರ್ಜಿಯನ್ನು ಪೂರ್ಣವಾಗಿ ಭರ್ತಿ ಮಾಡಿ, ಜನ್ಮ ದಿನಾಂಕ, ವಿದ್ಯಾರ್ಹತೆ ಹಾಗೂ ಅನುಭವಕ್ಕೆ ಸಂಬಂಧಪಟ್ಟ ಅಗತ್ಯ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಹಾಗೂ ರೂ.100/–ಗಳ ಭಾರತೀಯ ಪೋಸ್ಟಲ್ ಆರ್ಡರ್/ ಡಿ.ಡಿ.ಯನ್ನು ಅಧ್ಯಕ್ಷರು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಬೆಂಗಳೂರು, ಇವರ ಹೆಸರಿನಲ್ಲಿ ಪಡೆದು ಅರ್ಜಿಯಲ್ಲಿ ಶುಲ್ಕದ ವಿವರಗಳನ್ನು ಬರೆದು ಅರ್ಜಿಯೊಂದಿಗೆ ಲಗತ್ತಿಸಿ (ಆಯ್ಕೆ ಬಯಸಿರುವ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳ ಹೆಸರುಗಳನ್ನು ನಿಗದಿತ ಒಂದೇ ಅರ್ಜಿ ನಮೂನೆಯಲ್ಲಿ ನಮೂದಿಸುವುದು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆವಾರು ಹುದ್ದೆಗಳಿಗೆ ಪ್ರತ್ಯೇಕ ಅರ್ಜಿ ಸಲ್ಲಿಸುವ ಅವಶ್ಯಕತೆ ಇರುವುದಿಲ್ಲ ಹಾಗೂ ಒಂದು ಅಥವಾ ಒಂದಕ್ಕಿಂತ ಹೆಚ್ಚು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗೆ ಆಯ್ಕೆ ಬಯಸಿದ್ದರೂ ಸಹ ರೂ.100/–ಗಳ ಒಂದು ಭಾರತೀಯ ಪೋಸ್ಟಲ್ ಆರ್ಡರ್/ ಡಿ.ಡಿ. ಯನ್ನು ಮಾತ್ರ ಪಡೆದು ನಿಗಧಿತ ಅರ್ಜಿಯಲ್ಲಿ ವಿವರ ಬರೆದು ಅರ್ಜಿಯೊಂದಿಗೆ ಸಲ್ಲಿಸುವುದು) **ದಿನಾಂಕ : 21–09–2015ರ ಸಂಜೆ 5–00 ಘಂಟೆಯೊಳಗಾಗಿ ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿ, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈ ಗ್ರೌಂಡ್ಸ್, ಬೆಂಗಳೂರು–560001 ಇವರಿಗೆ ತಲುಪುವಂತೆ ಸಲ್ಲಿಸುವುದು.**

ನಿಗಧಿತ ದಿನಾಂಕ ಹಾಗೂ ಸಮಯದ ನಂತರ ಅಂಚೆ/ಕೊರಿಯರ್ ಮೂಲಕ ಅಥವಾ ನೇರವಾಗಿ ಬರುವಂತಹ ಯಾವುದೇ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ನಿಗಧಿತ ಅರ್ಜಿ ನಮೂನೆಯು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ವೆಬ್‌ಸೈಟ್ http://kscdrc.kar.nic.in ನಲ್ಲಿ ಲಭ್ಯವಿದ್ದು, ಸಂಬಂಧಪಟ್ಟ ಅರ್ಹ ಅಭ್ಯರ್ಥಿಗಳು ವೆಬ್‌ಸೈಟಿನಿಂದ ಅರ್ಜಿ ನಮೂನೆಯನ್ನು ನೇರವಾಗಿ ಪಡೆದುಕೊಳ್ಳಬಹುದಾಗಿದೆ ಅಥವಾ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದಲ್ಲಿ ನೇರವಾಗಿ ಪ್ರತಿ ಅರ್ಜಿಗೆ ರೂ. 50/–ಗಳ ನಗದನ್ನು ಪಾವತಿ ಮಾಡಿ ಅರ್ಜಿಯನ್ನು ಪಡೆದುಕೊಳ್ಳಬಹುದು.

**ನ್ಯಾಯಮೂರ್ತಿ ಬಿ.ಎಸ್. ಇಂದ್ರಕಲಾ**
ಅಧ್ಯಕ್ಷರು
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ
ಬೆಂಗಳೂರು

**PR 221**
**S.C. 10**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59